# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜುಲೈ ೨೮, ೨೦೧೬ (ಶ್ರಾವಣ ೬, ಶಕ ವರ್ಷ ೧೯೩೮)<br>Bengaluru, Thursday, July 28, 2016 ( Shravana 6, Shaka Varsha 1938) | ಸಂಚಿಕೆ ೩೦<br>Issue 30 |
|---|---|---|

## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

### ENERGY SECRETARIAT

**NOTIFICATION**

**NO: EN 232 EBS 2015 BENGALURU, DATED: 31-05-2016.**

In exercise of the powers conferred by clause (a) of sub-section (2) of section 3 of the Karnataka Electricity (Taxation on consumption or sale) Act, 1959 (Karnataka Act 14 of 1959), the Government of Karnataka, in supersession of Notification-I bearing No: EN 27 EBS 2013 dated: No:24.11.2014, hereby specifies that ten paise (10 paise) per unit shall be levied and collected as electricity tax on captive consumption of electricity generated by the Captive Power Generating Plant having total installed capacity of above 500 KVA, with immediate effect until further orders.

By Order and in the name of the Governor of Karnataka,

**N. SHIVAKUMAR**
Desk Officer,
Energy Department.

**PR.-477**
**SC-200**

### ಒಳಾಡಳಿತ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ:ಹೆಚ್‌ಡಿ 176 ಎಸ್‌ಎಸ್‌ಟಿ 2016 ಬೆಂಗಳೂರು, ದಿನಾಂಕ: 31–05–2016**

ಸಂವಿಧಾನದ ಅನುಸೂಚಿ 7 ರಲ್ಲಿನ 2ನೇ ಪಟ್ಟಿಯಲ್ಲಿರುವ **'ಸಾರ್ವಜನಿಕ ಸುವ್ಯವಸ್ಥೆ'** ಮತ್ತು 'ಪೊಲೀಸ್'ಗೆ ಸಂಬಂಧಿಸಿದ ಎಲ್ಲಾ ಸೇವೆಗಳ ಕುರಿತು ರಾಜ್ಯ ಶಾಸನಾಂಗವು ಕಾನೂನು ರೂಪಿಸುವ ಅಧಿಕಾರ ಹೊಂದಿರುತ್ತದೆ.

ಅಪರಾಧ ಪತ್ತೆ ಹಾಗೂ ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಯೊಂದಿಗೆ ನಾಗರಿಕರ ಆಸ್ತಿ ಮತ್ತು ಜೀವವನ್ನು ರಕ್ಷಿಸುವುದು ರಾಜ್ಯ ಪೊಲೀಸ್ ಸಿಬ್ಬಂದಿಯ ಮೂಲ ಅತ್ಯಾವಶ್ಯಕ ಕರ್ತವ್ಯವಾಗಿರುತ್ತದೆ. ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯು ಕಾರ್ಯನಿರ್ವಹಿಸಲು ನಿರಾಕರಿಸಿದಲ್ಲಿ, ಸಾರ್ವಜನಿಕ ಸುವ್ಯವಸ್ಥೆ ಮತ್ತು ಸುರಕ್ಷತೆಗೆ ದಕ್ಕೆ ಉಂಟಾಗಿ ಸಮಾಜದ ಸ್ವಾಸ್ಥ್ಯದ ಮೇಲೆ ತೀವ್ರ ದುಷ್ಪರಿಣಾಮ(ಕಳ್ಳತನ, ಕೊಲೆ, ಅತ್ಯಾಚಾರ, ಸುಲಿಗೆ, ದರೋಡೆ ಇನ್ನೂ ಮುಂತಾದ ಅಪರಾಧಗಳು) ಹೆಚ್ಚಾಗಿ ಸಾರ್ವಜನಿಕರ ಸುಗಮ ಜೀವನವು ಅಸ್ತವ್ಯಸ್ತವಾಗುವುದೆಂದು ಸರ್ಕಾರವು ಅಭಿಪ್ರಾಯಪಡುತ್ತದೆ.

ಆದ್ದರಿಂದ ಸಾರ್ವಜನಿಕ ಸುವ್ಯವಸ್ಥೆ ಮತ್ತು ಸುರಕ್ಷತೆ ದೃಷ್ಟಿಯಿಂದ ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ, 2013 (2015ರ ಕರ್ನಾಟಕ ಅಧಿನಿಯಮ 25) ರ 2ನೇ ಪ್ರಕರಣದ, (1)ನೇ ಉಪ ಪ್ರಕರಣದ (a) ಖಂಡದ (iii) ನೇ ಉಪ ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜ್ಯಸರ್ಕಾರವು ರಾಜ್ಯ ಪೊಲೀಸ್ ಸೇವೆಗೆ ಸೇರಿದ ಎಲ್ಲಾ ಸೇವೆ ಮತ್ತು ಉದ್ಯೋಗ ವರ್ಗಗಳನ್ನು ಈ ಕಾಯ್ದೆಯ ಉದ್ದೇಶಗಳಿಗಾಗಿ **"ಅತ್ಯಾವಶ್ಯಕ ಸೇವೆ"** ಎಂದು ಪರಿಗಣಿಸಿ ಕೂಡಲೇ ಜಾರಿಗೆ ಬರುವಂತೆ ಈ ಮೂಲಕ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಪದ್ಮಿನಿದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ)

**PR.-476**

**SC-50**

## KARNATAKA SERVICE

## (CONDITIONS OF SERVICE AND RECRUITMENT)

## (I AMENDMENT) RULES, 2016

## HIGH COURT OF KARNATAKA

## NOTIFICATION

## NO. HCE NO. 34/2016 DATED 19TH FEBRUARY 2016.

In exercise of powers conferred by Article 229(1) and (2) of the Constitution of India, read with Rules 7 & 8 of the High Court of Karnataka Service (Conditions of Service & Recruitment) Rules, 1973 and High Court of Karnataka Service (Direct Recruitment by Selection) Rules, 1984 and all other powers enabling thereunto, Hon'ble the Acting Chief Justice, High Court of Karnataka makes the following rules to amend the High Court of Karnataka Service (Conditions of Service and Recruitment) Rules, 1973.

**Title and Commencement:** (1) These Rules may be called as High Court of Karnataka Service (Conditions of Service and Recruitment) (I Amendment) Rules, 2016.

(2) They shall come into force on the date of publication in the Karnataka Gazette.

**Amendment to Schedule III**

In Schedule III of the High Court of Karnataka Service (Conditions of Service and Recruitment) Rules, 1973 as amended from time to time, under the heading Group – 'C' the entry at Sl. No. 42, the exiting method of recruitment (Column No.3) in respect of the Post of Book Binder shall be substituted by the following method of recruitment as mentioned at column No. 4 as below :-

| Sl. No. | Cadre Name | Existing method of recruitment | Amendment |
|---|---|---|---|
| **1** | **2** | **3** | **4** |
| 42. | Book Binder | By direct recruitment by selection of a person who has **passed VII Standard examination** and has got experience in Binding work for not less than three years. | By direct recruitment by selection of a person who has **passed Tenth Standard or equivalent** and has got experience in Binding work for not less than three years / Diploma in Book Binding.<br>OR<br>By promotion from the cadre of Assistant Binder based upon seniority – cum – merit, provided that they have completed two years of satisfactory service in the feeder cadre. |

After Note 5 below to Schedule III of High Court of Karnataka Service (Conditions of Service and Recruitment) Rules, 1973 as amended from time to time, the following note shall be inserted.

**Note 5A: Procedure for Direct Recruitment to Book Binder Posts :-**

(i) The appointing authority shall among the candidates who have applied for the post of Book Binder in pursuance of the notification, prepare a list of candidates eligible for interview in order of merit on the basis of percentage of total marks secured in the qualifying examination and taking into consideration the orders issued by the Government relating to the reservation of posts for Scheduled Caste, Scheduled Tribe and other Backward classes including the reservation for women, rural candidate, ex-servicemen and others in accordance with law. The number of candidates included in such list of eligible candidates for the said post shall be equal to **Five Times** the total number of vacancies notified in the order of merit.

(ii) The maximum marks for interview for recruitment to the post of Book Binder shall be Twenty (20). Such interview shall be held to ascertain the ability and suitability to the post.

BY ORDER OF HON'BLE THE ACTING CHIEF JUSTICE

**P.R. 557**

**S.C. 50**

**JOHN MICHAEL CUNHA**

REGISTRAR GENERAL

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 17 ಮುಆಬಿ 2016 ಬೆಂಗಳೂರು, ದಿನಾಂಕ: 30–05–2016.**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ ಈ ಕೆಳಕಂಡ ಕಲಂಗಳನ್ವಯ ಚಿಕ್ಕಮಗಳೂರು ಜಿಲ್ಲೆಯ ನಾಲ್ಕು ದೇವಾಲಯಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸಿ ಆದೇಶಿಸಿದೆ.

| ಕ್ರ.ಸಂ | ಸಂಸ್ಥೆಯ ಹೆಸರು | ಕಲಂ |
|---|---|---|
| 1 | ಶ್ರೀ ಅಮೃತೇಶ್ವರ ದೇವಾಲಯ, ಅಮೃತಾಪುರ ಗ್ರಾಮ, ತರೀಕೆರೆ ತಾಲ್ಲೂಕು | 23(ಎ)(i) |
| 2 | ಶ್ರೀ ದುರ್ಗಾ ದೇವಾಲಯ, ಗೋಣಿಬೀಡು ಗ್ರಾಮ, ಮೂಡಿಗೆರೆ ತಾಲ್ಲೂಕು | 23(ಎ)(ii) |
| 3 | ಶ್ರೀ ಹನುಮಂತ ದೇವಾಲಯ, ಸೋಮನಹಳ್ಳಿ, ಕಡೂರು ತಾಲ್ಲೂಕು | |
| 4 | ಶ್ರೀ ಜುಂಜಪ್ಪ ದೇವಾಲಯ, ಭಕ್ತನಕಟ್ಟೆ, ತರೀಕೆರೆ ತಾಲ್ಲೂಕು | 23(ಎ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR - 478**

**SC-25**

**ಬಿ.ಎಸ್. ನಾಗರತ್ನಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 48 ಎಲ್‌ಜಿಎ 2015 ಬೆಂಗಳೂರು, ದಿನಾಂಕ: 25–05–2016.**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ 5ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಹೊರಡಿಸಿದ ಆರ್‌ಡಿ 77 ಎಲ್‌ಜಿಎ 2013 ದಿನಾಂಕ: 21–11–2013ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ರಸ್ತೆ ಖರಾಬು ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಉಡುಪಿ ಜಿಲ್ಲೆಯ ಜಿಲ್ಲಾಧಿಕಾರಿಗಳ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ತರುವಾಯ ಸಾರ್ವಜನಿಕ ರಸ್ತೆಯ/ಓಣಿಯ/ಗಲ್ಲಿಯ/ದಾರಿಯ ಅಂಥ ಭಾಗದಲ್ಲಿನ ಅಥವಾ ಅದರ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| **ರಸ್ತೆಯ ಭಾಗವು ಇರುವ ಗ್ರಾಮ** | **ಕೊಲ್ಲೂರು** |
|---|---|
| ತಾಲ್ಲೂಕು | ಕುಂದಾಪುರ |
| ಜಿಲ್ಲೆ | ಉಡುಪಿ |
| ರಸ್ತೆಯ ಭಾಗದ ವರ್ಣನೆ | ಸ.ನಂ. 131/1 ರಲ್ಲಿನ ರಸ್ತೆ ಪೊರಂಬೋಕು ಭಾಗ ಅಥವಾ ಸಡಿ (ಪಹಣಿಯಂತೆ) |
| ರಸ್ತೆಯ ಭಾಗದ ಸರಿಸುಮಾರು ವಿಸ್ತೀರ್ಣ | ಸ.ನಂ. 131/1 ರಲ್ಲಿ 0.10 ಎಕರೆ |
| **ಮೇರೆಗಳು** | |
| ಪೂರ್ವ | ಸ.ನಂ.33ರ ಅಂಶ |
| ಪಶ್ಚಿಮ | ಸ.ನಂ.131/1ರ ಅಂಶ |
| ಉತ್ತರ | ಸ.ನಂ.131/1ರ ಅಂಶ |
| ದಕ್ಷಿಣ | ಸ.ನಂ.131/1ರ ಅಂಶ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR.-479**
**SC-20**

**ಉದಯ ಆರ್. ನಾಯಕ್**
**ಪೀಠಾಧಿಕಾರಿ,**
ಕಂದಾಯ ಇಲಾಖೆ, (ಭೂ.ಮಂ–2)

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.